

# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 1485

ಉತ್ತರಿಸಬೇಕಾದ ದಿನಾಂಕ : 17.03.2021.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ ಸಚಿವರು.

| ಕ್ರ.ಸಂ | | ಉತ್ತರಗಳು |
|---|---|---|
| ಅ | ರಾಜ್ಯದಲ್ಲಿ ದೇಸಿ ಹಸುವಿನ ತಳಿಗಳನ್ನು ಹಾಗೂ ದೇಸಿ ಹೈನುಗಾರಿಕೆಯನ್ನು ಉತ್ತೇಜಿಸಲು ಸರ್ಕಾರ ಕೈಗೊಂಡ ಯೋಜನೆಗಳು ಯಾವುವು: | ರಾಷ್ಟ್ರೀಯ ಹವಾಮಾನ ಬದಲಾವಣೆ ಅಳವಡಿಕೆ ನಿಧಿ (NAFCC) ಯೋಜನೆಯಡಿ ಉತ್ಕೃಷ್ಟ ತಳಿ ಲಕ್ಷಣ ಮತ್ತು ಅಧಿಕ ಹಾಲು ಉತ್ಪಾದನಾ ಸಾಮರ್ಥ್ಯ ಹೊಂದಿರುವ ಅಮೃತಮಹಲ್, ಹಳ್ಳಿಕಾರ್, ಮಲೆನಾಡು ಗಿಡ್ಡ ತಳಿಗಳ ಹಸುಗಳನ್ನು ರೈತರಿಂದ ಖರೀದಿಸಿ ಈ ಕೆಳಕಂಡ ಸ್ಥಳಗಳಲ್ಲಿ ಮಾತೃ ಕೇಂದ್ರಗಳನ್ನು ಸ್ಥಾಪಿಸಲಾಗಿದೆ.<br>1. ಅಮೃತಮಹಲ್ – ಲಿಂಗದಹಳ್ಳಿ, ಚಿಕ್ಕಮಗಳೂರು ಜಿಲ್ಲೆ.<br>2. ಹಳ್ಳಿಕಾರ್ – ಕುಣಿಕೇನಹಳ್ಳಿ, ತುಮಕೂರು ಜಿಲ್ಲೆ.<br>3. ಮಲೆನಾಡು ಗಿಡ್ಡ – ಕೊಯ್ಲಾ, ದಕ್ಷಿಣ ಕನ್ನಡ ಜಿಲ್ಲೆ.<br>ಈ ಮಾತೃ ಕೇಂದ್ರಗಳಲ್ಲಿ ಜನಿಸುವ ಗಂಡು ಕರುಗಳನ್ನು ಇಲಾಖೆಯ ವೀರ್ಯ ಸಂಸ್ಕರಣಾ ಕೇಂದ್ರಗಳಿಗೆ ವರ್ಗಾಯಿಸಿ ಘನೀಕೃತ ವೀರ್ಯ ನಳಿಕೆಗಳನ್ನು ಉತ್ಪಾದಿಸಿ ಈ ತಳಿಗಳ ಮೂಲ ಸಂವರ್ಧನಾ ಪ್ರದೇಶಗಳಲ್ಲಿ ರೈತರ ದೇಸಿ ತಳಿಯ ರಾಸುಗಳಿಗೆ ಕೃತಕ ಗರ್ಭಧಾರಣೆ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆ. |
| ಆ | ದೇಸಿ ಹಸುಗಳನ್ನು ಖರೀದಿಸಲು ಸರ್ಕಾರವು ಸಬ್ಸಿಡಿಯನ್ನು ನೀಡುತ್ತದೆಯೇ: | ಇಲ್ಲ. |
| ಇ | ಹಾಗಿದ್ದಲ್ಲಿ, ಎಷ್ಟು ಮೊತ್ತದ ಸಬ್ಸಿಡಿಯನ್ನು ಸರ್ಕಾರ ನೀಡುತ್ತಿದೆ (ಪೂರ್ಣ ಮಾಹಿತಿ ನೀಡುವುದು) | ಅನ್ವಯಿಸುವುದಿಲ್ಲ. |

ಪಸಂಮೀ ಇ–94 ಸಲೆವಿ 2021

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ ಸಚಿವರು